# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1817 (2137) |
| 2) | ಸದಸ್ಯರ ಹೆಸರು | : | ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನಸಭೆಯಿಂದ ಚುನಾಯಿತರಾದವರು) |
| 3) | ಉತ್ತರಿಸಬೇಕಾದ ದಿನಾಂಕ | : | 30.03.2020 |
| 4) | ಉತ್ತರಿಸುವವರು | : | ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ಕಾಡು ಹಂದಿಗಳ ಹಾವಳಿಯಿಂದಾಗಿ ರೈತರು ಸಂಕಷ್ಟಕ್ಕೀಡಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಸರ್ಕಾರ ಈ ಕುರಿತು ಕೈಗೊಂಡಿರುವ ಕ್ರಮಗಳೇನು; | ಸರ್ಕಾರದ ಆದೇಶ ಸಂಖ್ಯೆ: ಅಪಜೀ 96 ಎಫ್‌ಡಬ್ಲ್ಯೂಎಲ್ 2016, ದಿನಾಂಕ: 01.10.2018 ರನ್ವಯ ವನ್ಯಜೀವಿ (ಸಂರಕ್ಷಣಾ) ಕಾಯ್ದೆ 1972ರಲ್ಲಿನ ಉಪಬಂಧಗಳಲ್ಲಿರುವ ಅಧಿಕಾರಗಳು ಮತ್ತು ಸರ್ಕಾರದ ಆದೇಶ ಸಂಖ್ಯೆ:ಅಪಜೀ 81 ಎಫ್ ಡಬ್ಲ್ಯೂಎಲ್ 2009, ದಿನಾಂಕ: 26.08.2018ರ ಅಧಿಸೂಚನೆಯಲ್ಲಿ, ಸದರಿ ಅಧಿನಿಯಮ ದಡಿಯಲ್ಲಿ ಇಲಾಖೆಯ ವಿವಿಧ ಹಂತದ ಅಧಿಕಾರಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿರುವುದರ ಮುಂದುವರಿಕೆಯಾಗಿ ಕೇರಳ ರಾಜ್ಯದ ಮಾದರಿಯಲ್ಲಿ ಕಾಡುಹಂದಿಯ ಹಾವಳಿಯನ್ನು ತಡೆಗಟ್ಟಲು ಈ ಕೆಳಕಂಡ ಹೆಚ್ಚುವರಿ ಕ್ರಮಗಳನ್ನು ಕೈಗೊಳ್ಳಲು ಸರ್ಕಾರದಿಂದ ಅನುಮತಿ ನೀಡಲಾಗಿದೆ.<br>1. ಬೆಳೆಗೆ ಹಾನಿಮಾಡುವ ಕಾಡುಹಂದಿಗಳನ್ನು ಮಾಲೀಕರು ಬೆಳೆ ಬೆಳೆದಿರುವ ಪ್ರದೇಶದ ವ್ಯಾಪ್ತಿಯಲ್ಲಿ ಪರವಾನಿಗೆ ಹೊಂದಿರುವ ಬಂದೂಕಿನಿಂದ ಗುಂಡು ಹಾರಿಸಬಹುದಾಗಿದೆ ಅಥವಾ ಬೇಟೆಯಾಡಬಹುದಾಗಿದೆ.<br>2. ಈ ರೀತಿ ಗುಂಡು ಹಾರಿಸುವ ಮತ್ತು ಬೇಟೆಯಾಡುವ, ಸತ್ತ ಅಥವಾ ಜೀವಂತವಾಗಿರುವ ಕಾಡುಹಂದಿಯನ್ನು 24 ಗಂಟೆಯೊಳಗಾಗಿ ಹತ್ತಿರದ ಅರಣ್ಯ ಇಲಾಖೆಯ ಅಧಿಕಾರಿಗಳಿಗೆ ಹಸ್ತಾಂತರಿಸಬೇಕು.<br>3. ಕಾಡು ಹಂದಿಗೆ ಗುಂಡು ಹಾರಿಸಿದ್ದಲ್ಲಿ ಸಂಬಂಧಪಟ್ಟ ಫಾರೆಸ್ಟರ್ ಅಥವಾ ಮೇಲಿನ ಹಂತದ ಅಧಿಕಾರಿಗಳು ಇಬ್ಬರು ಸಾಕ್ಷಿದಾರರ ಸಮ್ಮುಖದಲ್ಲಿ ಮಹಜರ್ ಮಾಡತಕ್ಕದ್ದು. |

| | | |
|---|---|---|
| | | 4. ಸತ್ತ ಕಾಡುಹಂದಿಯ ಮಾಂಸವನ್ನು ತಿನ್ನಲು ಅಥವಾ ಇತರೆ ಯಾವುದೇ ಉದ್ದೇಶಕ್ಕಾಗಿ ಉಪಯೋಗಿಸಬಾರದು.<br>5. ಕಾಡುಹಂದಿಯ ಸತ್ತ ಶವವನ್ನು ಮೂರು ಅಡಿ ಆಳದ ಗುಂಡಿಯಲ್ಲಿ ಸಮಾಧಿ ಮಾಡತಕ್ಕದ್ದು ಅಥವಾ ಸುಡತಕ್ಕದ್ದು.<br>6. ಇಂತಹ ಪ್ರಕರಣಗಳನ್ನು ರಾಜ್ಯದ ಮುಖ್ಯ ವನ್ಯಜೀವಿ ಪರಿಪಾಲಕರಿಗೆ ತಕ್ಷಣ ವರದಿ ಮಾಡತಕ್ಕದ್ದು.<br>7. ಇಂತಹ ಪ್ರಕರಣಗಳ ಮೇಲ್ವಿಚಾರಣೆ ಮಾಡಲು ಸ್ಥಳೀಯ ವಿಧಾನಸಭಾ ಸದಸ್ಯರು, ಉಪ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಸಾರ್ವಜನಿಕರನ್ನೊಳಗೊಂಡ ಸಮಿತಿಯನ್ನು ರಚಿಸತಕ್ಕದ್ದು.<br>8. ಅತಿಕ್ರಮಣ ಮಾಡಿರುವ ಪ್ರದೇಶಗಳಲ್ಲಿ ಕಾಡುಹಂದಿಗಳನ್ನು ಕೊಲ್ಲುವುದನ್ನು ನಿಷೇಧಿಸಲಾಗಿದೆ.<br>9. ಹಾಲು ಕರೆಯುವ ಕಾಡುಹಂದಿಯನ್ನು ಕೊಲ್ಲತಕ್ಕದ್ದಲ್ಲ.<br>10. ಈ ಕಾರ್ಯಾಚರಣೆಯ ಸಂದರ್ಭದಲ್ಲಿ ಕಾಡುಹಂದಿಯು ಅರಣ್ಯಕ್ಕೆ ತಪ್ಪಿಸಿಕೊಂಡು ಹೋದಲ್ಲಿ ಅದನ್ನು ಹಿಂಬಾಲಿಸಿ ಕೊಲ್ಲತಕ್ಕದ್ದಲ್ಲ.<br>11. ಸತ್ತ ಕಾಡುಹಂದಿಯನ್ನು ಅರಣ್ಯ ಮತ್ತು ವನ್ಯಜೀವಿ ಇಲಾಖೆಯಿಂದಲೇ ಶವಸಂಸ್ಕಾರ ಮಾಡತಕ್ಕದ್ದು. |
| ಇ) | ಕಾಡು ಹಂದಿಗಳ ಸಂಖ್ಯೆ ವಿಪರೀತ ಹೆಚ್ಚಾದಾಗ ಅವುಗಳ ಹಾವಳಿ ಹಾಗೂ ಅದರಿಂದಾಗಿ ರೈತರಿಗೆ ಆಗುವ ನಷ್ಟ ಹಾಗೂ ಹಾನಿ ತಪ್ಪಿಸಲು ಪ್ರಸ್ತುತ ಅರಣ್ಯ ಇಲಾಖೆ ಅನುಸರಿಸುತ್ತಿರುವ ನಿಯಮ ಹಾಗೂ ಮಾರ್ಗಸೂಚನೆಗಳೇನು; (ಸಂಪೂರ್ಣ ವಿವರ ನೀಡುವುದು) | ಕಾಡು ಹಂದಿಗಳ ಹಾವಳಿಯಿಂದ ಕೃಷಿ ನಷ್ಟದ ಬಗ್ಗೆ ರೈತರಿಂದ ದೂರುಗಳು ಬಂದಲ್ಲಿ ಅವುಗಳನ್ನು ಅರಣ್ಯ ಇಲಾಖೆಯ ಸಿಬ್ಬಂದಿಗಳ ಸಹಾಯದಿಂದ ಪಟಾಕಿ ಸಿಡಿಸಿ ಕಾಡಿಗೆ ಓಡಿಸುವ ಕಾರ್ಯವನ್ನು ಕೈಗೊಳ್ಳಲಾಗುತ್ತದೆ. |
| ಈ) | ಪ್ರಸ್ತುತ ಇರುವ ನಿಯಮ ಹಾಗೂ ಮಾರ್ಗಸೂಚಿಗಳಲ್ಲಿ ಕಾಡು ಹಂದಿಗಳ ವ್ಯವಸ್ಥಿತ ನಿಯಂತ್ರಣಕ್ಕೆ ಅವಕಾಶವಿಲ್ಲದಿದ್ದಲ್ಲಿ ಈ ನಿಯಮಗಳಿಗೆ ಬದಲಾವಣೆ ತರಲು ಸರ್ಕಾರ ಕೂಡಲೇ ಕ್ರಮಕೈಗೊಳ್ಳಲು ಮುಂದಾಗುವುದೇ? | ಉಪ ಪ್ರಶ್ನೆ ಸಂಖ್ಯೆ: (ಅ)ನಲ್ಲಿ ವಿವರಿಸಿದಂತೆ ಮಾರ್ಗಸೂಚಿಗಳು ಲಭ್ಯವಿರುತ್ತವೆ. |

ಸಂಖ್ಯೆ: ಅಪಜೀ 94 ಎಫ್‌ಡಬ್ಲ್ಯೂಎಲ್ 2020

(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

ಆನಂದ್ ಸಿಂಗ್ ಸಚಿವರು
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ